# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಜನವರಿ ೨೮, ೨೦೧೬ (ಮಾಘ ೮, ಶಕ ವರ್ಷ ೧೯೩೭)<br>Bengaluru, Thursday, January 28, 2016 (Magha 8, Shaka Varsha 1937) | ಸಂಚಿಕೆ ೪<br>Issue 4 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ನಿರ್ದೇಶಕರು, ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು

**ವಿಷಯ :** ಶ್ರೀ.ಹೆಚ್.ವಾಸುದೇವ, ಅಧೀಕ್ಷಕರು, ಸರ್ಕಾರಿ ಇಂಜಿನಿಯರಿಂಗ್ ಕಾಲೇಜ್, ಹಾವೇರಿ ಇವರ ಕರ್ತವ್ಯ ನಿರ್ಲಕ್ಷತೆ ಬಗ್ಗೆ.

**ಉಲ್ಲೇಖ :**

1. ಪ್ರಿನ್ಸಿಪಾಲರು ನಿರ್ದೇಶಕರಿಗೆ ಬರೆದ ಪತ್ರ ದಿನಾಂಕ: 7–6–2012.
2. ಪ್ರಿನ್ಸಿಪಾಲರು ಶ್ರೀ.ಹೆಚ್.ವಾಸುದೇವ ಇವರಿಗೆ ಜಾರಿ ಮಾಡಲಾದ ಜ್ಞಾಪನ ಪತ್ರ ದಿನಾಂಕಗಳು: 27/10/2009, 10/11/2009, 23/12/2009, 8/1/2010, 6/4/2010, 18/5/2010, 25/8/2010, 28/09/2010, 29/10/2010, 27/1/2011, 27/5/2011, 7/10/2011, 11/11/2011, 14/12/2011, 10/1/2012, 20/4/2012, 8/5/2012, 16/5/2012, 7/6/2012 ಮತ್ತು 15/11/2012.
3. ಪೂರ್ವಭಾವಿ ಇಲಾಖಾ ವಿಚಾರಣೆ ನಡೆಸಲು ನೇಮಿಸಲಾದ ಜ್ಞಾಪನ ಪತ್ರ ದಿನಾಂಕ: 23/6/2012.
4. ಶ್ರೀ.ಹೆಚ್.ಸಿ.ವೀರಣ್ಣ, ಲೆಕ್ಕಾಧಿಕಾರಿಗಳು ಇವರ ನೇತೃತ್ವದ ಪೂರ್ವಭಾವಿ ಇಲಾಖಾ ವಿಚಾರಣಾ ವರದಿ ದಿನಾಂಕ: 06/11/2011 ಮತ್ತು ಲಗತ್ತಿಸಿರುವ ದಾಖಲೆಗಳು.
5. ಈ ಕಛೇರಿಯ ದೋಷಾರೋಪಣಾ ಪಟ್ಟಿ ಸಂ: ಡಿಟಿಇ 09 ಡಿಇಕ್ಯೂ(1)2012, ದಿನಾಂಕ: 18/09/2013.
6. ನ್ಯಾಯಾಧೀಶರನ್ನು ನೇಮಿಸಲಾದ ದಿನಾಂಕ: 29/10/2013.
7. ವಿಚಾರಣಾಧಿಕಾರಿಗಳು ಸಲ್ಲಿಸಿರುವ ಇಲಾಖಾ ವಿಚಾರಣಾ ಅಂತಿಮ ವರದಿ ದಿನಾಂಕ: 23/06/2014.
8. 2ನೇ ಕಾರಣ ಕೇಳುವ ನೋಟಿಸ್ ದಿನಾಂಕ: 18/09/2014.
9. 2ನೇ ಕಾರಣ ಕೇಳುವ ನೋಟಿಸ್‌ಗೆ ಶ್ರೀ ಹೆಚ್.ವಾಸುದೇವ ಇವರ ಸಮಜಾಯಿಷಿ ಪತ್ರ ದಿನಾಂಕ: 13/11/2014.

**ಪ್ರಸ್ತಾವನೆ:–**

ಶ್ರೀ.ಹೆಚ್.ವಾಸುದೇವ, ಅಧೀಕ್ಷಕರು, ಸರ್ಕಾರಿ ಇಂಜಿನಿಯರಿಂಗ್ ಕಾಲೇಜ್, ಹಾವೇರಿ ಆದ ಇವರು ಈ ಹಿಂದೆ ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ನಿಮ್ಮ ವಿರುದ್ಧ ಕರ್ತವ್ಯ ಲೋಪದ ಬಗ್ಗೆ ಇಲಾಖಾ ವತಿಯಿಂದ ಪೂರ್ವಭಾವಿ ತನಿಖೆ ನಡೆಸಲು ತೀರ್ಮಾನಿಸಿ ತನಿಖಾ ತಂಡವನ್ನು ನಿಯೋಜಿಸಲಾಗಿತ್ತು. ಅದರಂತೆ ಸದರಿ ತನಿಖಾ ತಂಡದವರು ಅವರ ವಿರುದ್ಧ ಆರೋಪಗಳ ಬಗ್ಗೆ ತನಿಖೆ ನಡೆಸಿ ಸಲ್ಲಿಸಿದ ವರದಿಯನ್ನು ಅವಲೋಕಿಸಿದಾಗ ಸದರಿಯವರು ಕಛೇರಿ ಕೆಲಸಕ್ಕೆ ಪದೇ ಪದೇ ಗೈರು ಹಾಜರಾಗಿರುತ್ತಾರೆ ಹಾಗೂ ಅವರಿಗೆ ವಹಿಸಲಾದ ಸರ್ಕಾರಿ ಕೆಲಸವನ್ನು ಸಮಪರ್ಕವಾಗಿ ನಿರ್ವಹಿಸಿರುವುದಿಲ್ಲ. ಪಿ.ಡಿ. ಖಾತೆ ನಗದು ಪುಸ್ತಕ ಸಮರ್ಪಕವಾಗಿ ನಿರ್ವಹಿಸದೇ ಇರುವುದು, ಡಿ.ಸಿ. ಬಿಲ್ಲುಗಳನ್ನು ಕಳೆದುಹಾಕಿ ಸ್ವತಃ ಅವರೇ ಸಂಸ್ಥೆಗೆ ಹಣ ಸಂದಾಯ ಮಾಡಿರುತ್ತಾರೆಂದು ಕಛೇರಿಯ ಕಡತಗಳಲ್ಲಿ ಟಿಪ್ಪಣಿ ಮತ್ತು ಆದೇಶಗಳಲ್ಲಿನ ಪ್ರಾಚಾರ್ಯರ ನಕಲು ಸಹಿ ಮಾಡಿರುತ್ತಾರೆಂದು ಉಗ್ರಾಣ ವಿಭಾಗದಲ್ಲಿ ಇಂಡೆಂಟ್ ಮತ್ತು ಇನ್ವಾಯ್ಸ್‌ಗಳನ್ನು ಅಳವಡಿಸದೇ ಇರುವುದು ಮತ್ತು ವಿದ್ಯಾರ್ಥಿ ನಿಲಯದಲ್ಲಿನ ನಗದು ಪುಸ್ತಕ ಸಮರ್ಪಕವಾಗಿ ನಿರ್ವಹಿಸದೇ ಇರುವುದು ಕಂಡು ಬಂದಿರುತ್ತದೆ ಈ ಎಲ್ಲಾ ನ್ಯೂನತೆಗಳು ಅವರಿಂದಲೇ ನಡೆದಿದೆ ಎಂದು ಪೂರ್ವಭಾವಿ ಇಲಾಖಾ ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ. ಈ ಎಲ್ಲಾ ನಡತೆ ಮತ್ತು ವರ್ತನೆಯು ಅವರ ಕರ್ತವ್ಯ ನಿರ್ಲಕ್ಷತೆಯಿಂದ ಆಗಿರುತ್ತದೆ ಎಂದೂ ಸಹ ಪೂರ್ವಭಾವಿ

ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ. ಆದ್ದರಿಂದ ಕರ್ನಾಟಕ ಸರ್ಕಾರಿ ಸೇವಾ(ನಡತೆ) ನಿಯಮಾವಳಿ 1966ರ ನಿಯಮ 3(1)ರ ಉಪನಿಯಮ (i) (ii) ಮತ್ತು (iii)ನ್ನು ಹಾಗೂ ನಿಯಮ 19ನ್ನು ಉಲ್ಲಂಘಿಸಿದ ಆರೋಪಕ್ಕೆ ಒಳಗಾಗಿರುತ್ತಾರೆ.

ಶ್ರೀ.ಹೆಚ್.ವಾಸುದೇವ, ಅಧೀಕ್ಷಕರು, ಸರ್ಕಾರಿ ಇಂಜಿನಿಯರಿಂಗ್ ಕಾಲೇಜ್, ಹಾವೇರಿ ಇವರು ಈ ಹಿಂದೆ ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಅನಧಿಕೃತ ಗೈರುಹಾಜರಿಯಾಗಿದ್ದು, ಹಲವಾರು ಜ್ಞಾಪನಗಳನ್ನು ಜಾರಿ ಮಾಡಲಾಗಿದ್ದರೂ ಸಹ ಜ್ಞಾಪನ ಪತ್ರಗಳಿಗೆ ಯಾವುದೇ ಉತ್ತರಗಳನ್ನು ನೀಡಿರುವುದಿಲ್ಲ. ಗೈರುಹಾಜರಿಯಾದ ಸಂದರ್ಭಗಳಲ್ಲಿ ಅಲ್ಮೆರಾ ಕೀಗಳನ್ನು ನೀಡದೆ ಹಾಗೆಯೇ ಹೋಗುತ್ತಿದ್ದು, ಈ ಬಗ್ಗೆ ಸೂಚನೆ ನೀಡಿದ್ದರೂ ಪುನಃ ಪುನರಾವರ್ತಿಸಿರುತ್ತಾರೆ.

ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಹಾವೇರಿ ಈ ಮಹಾವಿದ್ಯಾಲಯವು 2007–08ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಪ್ರಾರಂಭವಾಗಿದ್ದು, ಉಗ್ರಾಣ, ನಗದು, ಲೆಕ್ಕ ಮತ್ತು ಗ್ರಂಥಾಲಯ ವಿಭಾಗದ ಪ್ರಭಾರೆಯನ್ನು ವಹಿಸಿಕೊಂಡ ಇವರು ನಗದು ವಿಭಾಗಕ್ಕೆ ಸಂಬಂದಿಸಿದಂತೆ ಪಿ.ಡಿ.ನಗದು ಪುಸ್ತಕ ಮತ್ತು ವಿದ್ಯಾರ್ಥಿ ಸಂಘಕ್ಕೆ ಸಂಬಂಧಿಸಿದ ನಗದು ಪುಸ್ತಕಗಳನ್ನು ಪ್ರಾರಂಭದಿಂದಲೂ ನಿರ್ವಹಿಸಿರುವುದಿಲ್ಲ ಮತ್ತು ಉಗ್ರಾಣ ವಿಭಾಗದಲ್ಲಿಯೂ ನಿಯಮಾನುಸಾರ ಕಾರ್ಯನಿರ್ವಹಿಸಿರುವುದಿಲ್ಲ.

2011–12ನೇ ಸಾಲಿನ 10 ಡಿ.ಸಿ.ಬಿಲ್ಲುಗಳ ಒಟ್ಟು ರೂ.37.114/–ಗಳನ್ನು ಪ್ರಿನ್ಸಿಪಾಲರ ಗಮನಕ್ಕೆ ತರದೇ ನಿರ್ದೇಶನಾಲಯಕ್ಕೆ ಮೇಲು ರುಜುವಾಗಿ ಕಳುಹಿಸಿಕೊಡಲಾಗಿದ್ದು, ಸದರಿ ಬಿಲ್ಲುಗಳು ಆಕ್ಷೇಪಣೆಯಾಗಿ ನಿರ್ದೇಶನಾಲಯದಿಂದ ಹಿಂತಿರುಗಿ ಬಂದ ನಂತರ ಬಿಲ್‌ಗಳನ್ನು ಖಜಾನೆಗೆ ಸಲ್ಲಿಸಿರುವುದು ಬೆಳಕಿಗೆ ಬಂದಿರುತ್ತದೆ. ಸಂಸ್ಥೆಯ ಪ್ರಿನ್ಸಿಪಾಲರ ಗಮನಕ್ಕೆ ತರದೇ ಬಿಲ್‌ಗಳನ್ನು ಖಜಾನೆಗೆ ಸಲ್ಲಿಸಿರುವುದು ನಿಯಮಬಾಹಿರವಾಗಿರುತ್ತದೆ.

ದಿನಾಂಕ: 22–11–2010ರ ಜ್ಞಾಪನ ಪತ್ರ ಸಂ: ಸಇಂಕಾಹಾ/115/ಇಎಸ್‌ಟಿ/2008–09/252, ದಿನಾಂಕ: 16–5–2012 ರಲ್ಲಿ ತಿಳಿಸಿರುವ ಸುಮಾರು 10 ಡಿ.ಸಿ.ಬಿಲ್ಲುಗಳ ಒಟ್ಟು ಮೊತ್ತ ರೂ.37,114/–ಗಳನ್ನು 2011–12ನೇ ಸಾಲಿನ ಬಿಲ್ಲುಗಳಾಗಿರುವುದರಿಂದ ಅವುಗಳನ್ನು ಸರ್ಕಾರದ ಆರ್ಥಿಕ ಇಲಾಖೆ ಅಧಿಸೂಚನೆ ಸಂ.ಆಇ/18/ಟಿಪಿಇ/2011, ದಿನಾಂಕ: 22–12–2011 ರನ್ವಯ ದಿನಾಂಕ: 31–1–2012 ಹಾಗೂ ಅದಕ್ಕೂ ಮುಂಚಿತ ಅವಧಿಯಲ್ಲಿ ಭರಿಸಿದ ಎಲ್ಲಾ ಸಾದಿಲ್ವಾರ್ ಬಿಲ್ಲುಗಳನ್ನು ದಿನಾಂಕ: 19–2–2012ರವರೆಗೆ ಖಜಾನೆಗೆ ಸಲ್ಲಿಸಲು ಕೊನೆಯ ದಿನಾಂಕವಾಗಿರುವುದರಿಂದ ಬಿಲ್ಲುಗಳನ್ನು ಸಲ್ಲಿಸುವಂತೆ ಸದರಿಯವರಿಗೆ ಸೂಚಿಸಲಾಗಿದ್ದರೂ ಸಹ ಯಾವುದೇ ಕ್ರಮ ಕೈಗೊಳ್ಳದೇ ಕರ್ತವ್ಯ ನಿರ್ಲಕ್ಷತನ ತೋರಿರುತ್ತಾರೆ.

2007–08ನೇ ಸಾಲಿನಿಂದ 2009–10ನೇ ಸಾಲಿನವರೆಗೆ ಪ್ರಥಮ ವರ್ಷದ ಬಿ.ಇ. ವಿದ್ಯಾರ್ಥಿಗಳ ಬೋಧನಾ ಶುಲ್ಕ ಮತ್ತು ನೋಂದಣಿ ಶುಲ್ಕಗಳನ್ನು ಪ್ರಾಂಶುಪಾಲರ ಖಾತೆಗೆ ಜಮೆ ಆಗಿದ್ದು, ತದನಂತರದ ಶುಲ್ಕಗಳನ್ನು ಸರ್ಕಾರಕ್ಕೆ ಜಮಾ ಮಾಡಿರುವುದಿಲ್ಲ.

ಸಂಸ್ಥೆಯ ಬಿಲ್ಲು ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದು ಮೆ:ಸಿಗ್ಮಾ ಕಂಪ್ಯೂಟರ್ಸ್, ದಾವಣಗೆರೆ ಇವರಿಂದ ಇ&ಸಿ ವಿಭಾಗಕ್ಕೆ ಸಾಮಗ್ರಿಗಳನ್ನು ಖರೀದಿ ಮಾಡಿ ಡಿ.ಸಿ.ಬಿಲ್ಲೊಂದಿಗೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಮೇಲು ರುಜುವಾಗಿ ಸಲ್ಲಿಸಿದ್ದು, ಮೇಲು ರುಜು ಆದ ನಂತರ ಸಂಸ್ಥೆಗೆ ಹಿಂತಿರುಗಿಸಲ್ಪಟ್ಟ ಡಿ.ಸಿ.ಬಿಲ್ಲುಗಳನ್ನು ಈ ಕೆಳಕಂಡ ಚಲನ್‌ನೊಂದಿಗೆ ಖಜಾನೆಗೆ ಸಲ್ಲಿಸಲಾಗಿದೆ.

| | | |
|---|---|---|
| 1) ಚಲನ್ ಸಂ:1436929/8–12–2010 | – | ರೂ.2361–00 |
| 2) ಚಲನ್ ಸಂ:1436930/8–12–2010 | – | ರೂ.2933–00 |
| 3) ಚಲನ್ ಸಂ:1436931/8–12–2010 | – | ರೂ.2911–00 |
| | **ಒಟ್ಟು** | **ರೂ.8205–00** |

ಡಿ.ಸಿ.ಬಿಲ್ಲಿಗೆ ಸಂಬಂದಿಸಿದಂತೆ 03 ಮೇಲು ರುಜು ಡಿ.ಸಿ.ಬಿಲ್ಲುಗಳು ಎಲ್ಲಿ ಕಳೆದು ಹೋದೇವು ಎಂದು ನನಗೆ ಗೊತ್ತಿಲ್ಲ, ನನ್ನ ಸ್ವಂತ ಹಣದಿಂದ ರೂ.8205/– ಗಳನ್ನು ಕಾಲೇಜಿನ ಸಾಮಾನ್ಯ ರಸೀತಿ ಪುಸ್ತಕ ಸಂ. 5728 ಹಣ ಸ್ವೀಕರಿಸಿದ ರಸೀತಿ ಸಂ.572706 ಮೂಲಕ ಪ್ರಾಂಶುಪಾಲರ ಖಾತೆಗೆ ಜಮಾ ಮಾಡಿರುತ್ತಾರೆ. ಜಮಾ ಮಾಡಿರುವ ರಸೀದಿ ಪುಸ್ತಕದ ನಕಲು ನನ್ನ ಬಳಿ ಇರುತ್ತದೆಯೆಂದು ಹೇಳಿಕೆ ನೀಡಿರುತ್ತಾರೆ. ಈ ರೀತಿ ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿ ಸರ್ಕಾರಕ್ಕೆ ಆರ್ಥಿಕ ನಷ್ಟವನ್ನುಂಟು ಮಾಡಿ ಮತ್ತು ತಾತ್ಕಾಲಿಕವಾಗಿ ಹಣ ದುರುಪಯೋಗಪಡಿಸಿಕೊಂಡಿರುತ್ತಾರೆ.

ಕಛೇರಿಯ ಜ್ಞಾಪನ ಪತ್ರ ದಿನಾಂಕ: 29–10–2010ರನ್ವಯ ಟಿಪ್ಪಣಿ ಮತ್ತು ಆದೇಶದಲ್ಲಿ ಪ್ರಾಚಾರ್ಯರಾದ ಶ್ರೀ ಡಿ.ಎಸ್.ಪ್ರಕಾಶ್ ರವರ ನಕಲಿ ರುಜು ಮಾಡಿರುತ್ತಾರೆ.

2009–10ರ ಬಾಡಿಗೆ ದರದ ಮೇಲೆ ಡೆಸ್ಕ್ ಬಾಡಿಗೆ ಕಡತದಲ್ಲಿ 2009–10ನೇ ಸಾಲಿನ ವಿದ್ಯಾರ್ಥಿಗಳು ಕೂರುವ ರಿವರ್ಸಿಬಲ್ ಡೆಸ್ಕನ್ನು ಬಾಡಿಗೆ ರೂಪದಲ್ಲಿ ತೆಗೆದುಕೊಳ್ಳುವುದಕ್ಕೆ ಟಿಪ್ಪಣಿ ಮತ್ತು ಆದೇಶಕ್ಕೆ ಪ್ರಾಂಶುಪಾಲರ ನಕಲಿ ಸಹಿಯನ್ನು ಮಾಡಿರುತ್ತಾರೆ.

ಸೈನಿಕ ಧ್ವಜದ ಹಣ ಜಮೆ ಮಾಡದಿರುವ ಬಗ್ಗೆ ನಿರ್ದೇಶನಾಲಯದಿಂದ 2007–08ನೇ ಸಾಲಿನ ಸೈನಿಕ ಧ್ವಜಗಳು ಬಂದಿದ್ದು, ಈ ಧ್ವಜಗಳ ಮಾರಟದ ನಂತರ ಸರ್ಕಾರಕ್ಕೆ ಜಮಾ ಮಾಡಿರುವುದಿಲ್ಲ. ಅನಂತರ ಶ್ರೀ.ನಾಗರಾಜು, ಕಛೇರಿ ಅಧೀಕ್ಷಕರು ಇವರಿಗೆ ನಗದು ಪ್ರಭಾರೆ ವಹಿಸುವಾಗ ಸರ್ಕಾರಕ್ಕೆ ಜಮಾ ಮಾಡಿರುವುದಾಗಿ ತಿಳಿಸಿರುತ್ತಾರೆ. ಆದರೆ ಯಾವುದೇ ದಾಖಲೆ ಒದಗಿಸಿರುವುದಿಲ್ಲ. ಹಣ ದುರುಪಯೋಗ ಮತ್ತು ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿರುತ್ತಾರೆ.

ಸದರಿಯವರು ನಗದು ಪುಸ್ತಕ ನಿರ್ವಹಿಸಿರುವುದಿಲ್ಲ ಮತ್ತು ಹಾಜಾರುಪಡಿಸಿರುವುದಿಲ್ಲ ಸರ್ಕಾರಿ ನಿಯಮಗಳನ್ನು ಮತ್ತು ಆದೇಶಗಳನ್ನು ಉಲ್ಲಂಘಿಸಿ ತಮ್ಮ ಮನಬಂದಂತೆ ನಡೆದುಕೊಂಡಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಸಂಸ್ಥೆಯಲ್ಲಿ ನಡೆದಿರುವ ಹಣಕಾಸಿನ ದುರಾಚಾರಕ್ಕೆ ಇವರೇ ಪೂರ್ಣ ಹೊಣೆಗಾರರೆಂದು ಕಂಡುಬಂದಿರುತ್ತದೆ ಮತ್ತು ನಿರ್ದೇಶನಾಲಯದ ಆದೇಶಗಳನ್ನು ಹಾಗೂ ಮೇಲಾಧಿಕಾರಿಗಳ ಆದೇಶವನ್ನು ಪಾಲಿಸದೇ ಸ್ವ ಇಚ್ಛೆಯಿಂದ ನಡೆದುಕೊಂಡಿರುತ್ತಾರೆ. ಆದ್ದರಿಂದ ಇವರು ಒಬ್ಬ ಜವಾಬ್ದಾರಿಯುತ ನೌಕರರಾಗಿದ್ದು, ಸರ್ಕಾರಿ ಆದೇಶವನ್ನು ಉಲ್ಲಂಘಿಸಿ ಕರ್ತವ್ಯದಲ್ಲಿ ಸತ್ಯ, ನಿಷ್ಠೆ ಹಾಗೂ ಪ್ರಮಾಣಿಕತೆಯನ್ನು ತೋರಿಸಲು ವಿಫಲರಾಗಿ ಕರ್ನಾಟಕ ನಾಗರಿಕ ಸೇವಾ ನಡತೆ(ವರ್ತನೆ) ನಿಯಮಗಳು 1966 ರ ನಿಯಮ 3(1)ರ ಉಪನಿಯಮ (i) (ii) ಮತ್ತು (iii)ನ್ನು ಹಾಗೂ ನಿಯಮ 19ನ್ನು ಉಲ್ಲಂಘಿಸಿದ ಆರೋಪಕ್ಕೆ ಒಳಗಾಗಿರುತ್ತೀರಿ. ಆದುದರಿಂದ ಉಲ್ಲೇಖ(6)ರಲ್ಲಿ ಓದಲಾದ ನೋಟಿಸಿನಲ್ಲಿ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಿ ವಿವರಣೆಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು. ಸದರಿ ದೋಷಾರೋಪಣಾ ಪಟ್ಟಿಗೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸದೇ ಕರ್ತವ್ಯ ನಿರ್ಲಕ್ಷತೆ ತೋರಿಸಿರುತ್ತಾರೆ. ಆದುದರಿಂದ ಸದರಿಯವರ ಮೇಲಿನ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಉಲ್ಲೇಖ(7)ರಲ್ಲಿ ಓದಲಾದ ಈ ಕಛೇರಿ ಆದೇಶದಲ್ಲಿ ಶ್ರೀ.ಎಸ್.ಇಂದುಧರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ಅದರಂತೆ ವಿಚಾರಣಾಧಿಕಾರಿಗಳು ಸದರಿಯವರ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ವಿಚಾರಣೆಯನ್ನು ನಡೆಸಿ ಮೇಲೆ ಉಲ್ಲೇಖ(8)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಆಪಾದಿತರ ಮೇಲೆ ಹೊರಿಸಲಾಗಿರುವ (1) ರಿಂದ (11) ರವರೆಗಿನ ಎಲ್ಲಾ ಆರೋಪಗಳು ರುಜುವಾತಾಗಿದೆ ಎಂದು ವರದಿಯಲ್ಲಿ ತಿಳಿಸಿರುತ್ತಾರೆ. ಸದರಿ ವರದಿಯನ್ನು ಲಗತ್ತಿಸಿ ದಿನಾಂಕ: 18–09–2014ರಲ್ಲಿ ಎರಡನೇ ಕಾರಣ ಕೇಳುವ ನೋಟೀಸ್ ಮೂಲಕ 30 ದಿನಗಳ ಕಾಲಾವಕಾಶ ನೀಡಿ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಲು ತಿಳಿಸಲಾಗಿತ್ತು. ಅದರಂತೆ, ಸದರಿಯವರು ದಿನಾಂಕ: 13–11–2014ರಂದು ಅವರ ಲಿಖಿತ ಸಮಜಾಯಿಷಿ ಮತ್ತು ಅಡಕಗಳನ್ನು ಸಲ್ಲಿಸಿರುತ್ತಾರೆ. ಸದರಿಯವರ ಸಮಜಾಯಿಷಿಯನ್ನು ಪರಿಶೀಲಿಸಿದ ಶಿಸ್ತು ಪ್ರಾಧಿಕಾರವು, ಅವರ ಸಮಜಾಯಿಷಿಯನ್ನು ಒಪ್ಪದೆ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ವಯ ಶ್ರೀ.ಹೆಚ್.ವಾಸುದೇವ, ಅಧೀಕ್ಷಕರು, ಸರ್ಕಾರಿ ಇಂಜಿನಿಯರಿಂಗ್ ಕಾಲೇಜ್, ಹಾವೇರಿ ಇವರ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳ ಅಂತಿಮ ವರದಿಯನ್ನು ಅಂಗೀಕರಿಸಿ ಸದರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಂಡು ದಂಡನೆ ವಿಧಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂ: ಡಿಟಿಇ 09 ಡಿಇಕ್ಯೂ(1) 2012, ದಿನಾಂಕ: 08–10–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ.ಹೆಚ್.ವಾಸುದೇವ, ಅಧೀಕ್ಷಕರು, ಸರ್ಕಾರಿ ಇಂಜಿನಿಯರಿಂಗ್ ಕಾಲೇಜ್, ಹಾವೇರಿ ಇವರಿಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮ 8ರ ರೀತ್ಯಾ ಉಪನಿಯಮ 4ಎ ರಂತೆ ಸದರಿಯವರು ಕಾರ್ಯನಿರ್ವಹಿಸುತ್ತಿರುವ ಕಛೇರಿ ಅಧೀಕ್ಷಕರ ಹುದ್ದೆಯಲ್ಲಿ 02 ವರ್ಷಗಳ ಕಾಲ ವೇತನ ಶ್ರೇಣಿ 20000–36300ರಲ್ಲಿ ಪ್ರಾರಂಭದ ವೇತನ ರೂ.20,000/–ಕ್ಕೆ ಇಳಿಸಲಾಗಿದೆ. ಈ ದಂಡನೆ ಅವಧಿಯಲ್ಲಿ ಸದರಿಯವರು ಯಾವುದೇ ವಾರ್ಷಿಕ ವೇತನ ಬಡ್ತಿಗೆ ಮತ್ತು ಮುಂಬಡ್ತಿಗೆ ಅರ್ಹರಿರುವುದಿಲ್ಲ. 02 ವರ್ಷ ಪೂರ್ಣಗೊಂಡ ನಂತರ ವೇತನ ಶ್ರೇಣಿ ವೇತನವನ್ನು ಜೇಷ್ಠತೆ ಪುನಃ ಸ್ಥಾಪಿಸಬಹುದೆಂಬ ಷರತ್ತಿಗೊಳಪಟ್ಟು ದಂಡನೆ ವಿಧಿಸಿ ಆದೇಶಿಸಲಾಗಿದೆ.

**PR.-1037**
**SC-10**

**ನಿರ್ದೇಶಕರು.**
**ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ, ತಾಂತ್ರಿಕ ಶಿಕ್ಷಣ ಇಲಾಖೆ,**
**ಬೆಂಗಳೂರು.**

## ಒಳಾಡಳಿತ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಒಇ 485 ಪೊಸಿಪ 2015 ಬೆಂಗಳೂರು, ದಿನಾಂಕ: 18–11–2015.**

ಕೆ.ಎಸ್.ಆರ್.ಪಿ. ಡೆಪ್ಯೂಟಿ ಕಮಾಂಡೆಂಟ್‌ರವರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 31–12–2014ರಲ್ಲಿದ್ದಂತೆ ತಯಾರಿಸಿ ಇದರೊಂದಿಗಿರುವ ಅನುಬಂಧದಲ್ಲಿ ಲಗತ್ತಿಸಲಾಗಿದೆ.

ಈ ಪಟ್ಟಿಯಲ್ಲಿ ನಮೂದಿಸಿದ ಅಧಿಕಾರಿಗಳ ಜೇಷ್ಠತೆ : ಸೇವಾ ವಿವರಗಳ ಕುರಿತಂತೆ ಯಾವುದಾದರೂ ಆಕ್ಷೇಪಣೆ ಅಥವಾ ಸಲಹೆಗಳೇನಾದರೂ ಇದ್ದಲ್ಲಿ ಅವುಗಳನ್ನು ಲಿಖಿತವಾಗಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ ವಿಧಾನಸೌಧ, ಬೆಂಗಳೂರು–560001.ರವರಿಗೆ ಈ ಅಧಿಸೂಚನೆ ಪ್ರಕಟವಾದ 30 ದಿನಗಳೊಳಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜೆ.ಡಿ.ಮಧುಚಂದ್ರ ತೇಜಸ್ವಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ)

**ದಿನಾಂಕ: 31–12–2014ರಂದು ಇದ್ದಂತೆ ಕೆ.ಎಸ್.ಆರ್.ಪಿ ಡೆಪ್ಯೂಟಿ ಕಮಾಂಡೆಂಟ್ ರವರುಗಳ ಕರಡು ತಾತ್ಕಾಲಿಕ ಜೇಷ್ಠತಾ ಪಟ್ಟಿ.**

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀಯುತರು | ಜನ್ಮ ದಿನಾಂಕ | ಡೆಪ್ಯೂಟಿ ಕಮಾಂಡೆಂಟ್ ಹುದ್ದೆಗೆ ಮುಂಬಡ್ತಿ ಹೊಂದಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|
| 1 | ಜಿ.ಬಿ.ಪರಮೇಶ್ವರಪ್ಪ | 28–01–1955 | 23–05–2012 | 23–05–2012 | ನಿವೃತ್ತ |
| 2 | ವಿ.ಎ.ಜಿರಾಳ್ | 05–06–1955 | 23–05–2012 | 23–05–2012 | ನಿವೃತ್ತ |
| 3 | ಎನ್.ಜಗದೀಶ್ | 02–04–1959 | 23–05–2012 | 23–05–2012 | – |
| 4 | ಎ.ಹೆಚ್.ಶಂಕರ್ | 02–08–1955 | 23–05–2012 | 23–05–2012 | ನಿವೃತ್ತ |
| 5 | ಕೆ.ಎಸ್.ಸುದರ್ಶನ್ | 06–10–1955 | 23–05–2012 | 23–05–2012 | ನಿವೃತ್ತ |
| 6 | ಬಿ.ರಾಮಮೂರ್ತಿ | 04–09–1953 | 23–05–2012 | 23–05–2012 | ನಿವೃತ್ತ |
| 7 | ಬಿ.ಸಿ.ಕಲ್ಲಪ್ಪ | 29–05–1958 | 23–05–2012 | 23–05–2012 | – |
| 8 | ಟಿ.ಕೆ.ರಾಜಣ್ಣ | 08–08–1957 | 17–05–2013 | 17–05–2013 | – |
| 9 | ಆರ್.ಜನಾರ್ಧನ | 06–04–1975 | 30–09–2013 | 30–09–2013 | – |
| 10 | ರಾಮದಾಸ್ ನಾಯ್ಕ | 01–06–1956 | 30–09–2013 | 30–09–2013 | – |
| 11 | ಶಿವಕುಮಾರ್ | 26–06–1954 | 30–09–2013 | 30–09–2013 | ನಿವೃತ್ತ |
| 12 | ನಿಂಗಪ್ಪ | 18–10–1954 | 30–09–2013 | 30–09–2013 | ನಿವೃತ್ತ |
| 13 | ರಾಮಕೃಷ್ಣ | 26–03–1975 | 30–09–2013 | 30–09–2013 | – |
| 14 | ಬಿ.ಎಂ.ಪ್ರಸಾದ್ | 19–06–1971 | 30–09–2013 | 30–09–2013 | – |
| 15 | ಕೆ.ಎಸ್.ರಘುನಾಥ್ | 05–05–0976 | 18–10–2014 | 18–10–2014 | – |
| 16 | ಹೊನ್ನೇಗೌಡ | 13–11–1955 | 18–10–2014 | 18–10–2014 | – |
| 17 | ಸಿ.ಎನ್.ಅಪ್ಪಯ್ಯ | 16–06–1956 | 18–10–2014 | 18–10–2014 | – |

**PR.-1040**

**ಜೆ.ಡಿ.ಮಧುಚಂದ್ರ ತೇಜಸ್ವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ)

## ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು

### ನೇಮಕಾತಿ ಪ್ರಾಧಿಕಾರಿ ಹಾಗೂ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು

**ವಿಷಯ :** ಶ್ರೀ ದೀಪಕ್ ಮಾರುತಿ ನಾಯ್ಕ ಹಿಂದಿನ ಗ್ರೇಡ್–2 ಕಾರ್ಯದರ್ಶಿ ಬೆಳಾಲು ಗ್ರಾಮ ಪಂಚಾಯಿತಿ (ಪ್ರಸ್ತುತ ಅನಧಿಕೃತ ಗೈರು ಹಾಜರಿ) ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸ್ವಸ್ಥಾನದಲ್ಲಿ ಇಲ್ಲದಿರುವ ಬಗ್ಗೆ ಮಹಜರು ವರದಿ ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್ ಸುಳ್ಯ ಇವರ ಪತ್ರ ಸಂ:ತಾ.ಪಂ.ಬೆ/ಸಿಬ್ಬಂದಿ/ಬಿ5/ಸಿಆರ್23/2012–13/190 (ಹೆಚ್ಚುವರಿ ಪಾವತಿ ರೂ.4,875/–ರ ವಸೂಲಾತಿ)
2. ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್ ಬೆಳ್ತಂಗಡಿ ಈ ಪತ್ರ ಸಂಖ್ಯೆ:ತಾಪಂಬೆ/ಸಿಬ್ಬಂದಿ/ಬಿ5/ಸಿಆರ್23/2012–13/190 ದಿ: 08–06–2012.
3. ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್ ಬೆಳ್ತಂಗಡಿ ಇವರ ಪತ್ರಿಕಾ ಪ್ರಕಟಣೆ ದಿ: 13–12–2014.
4. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸುತ್ತೋಲೆ ಸಂ:ಸಿಆಸುಇ/18/ಸೇಇನಿ/2001 ದಿ: 14–09–2001.

**ಪ್ರಸ್ತಾವನೆ:–**

ಶ್ರೀ ದೀಪಕ್ ಮಾರುತಿ ನಾಯ್ಕ್, ಹಿಂದಿನ ಗ್ರೇಡ್–2 ಕಾರ್ಯದರ್ಶಿ, ಬೆಳಾಲು ಗ್ರಾಮ ಪಂಚಾಯತ್, ಬೆಳ್ತಂಗಡಿ ತಾಲ್ಲೂಕು ಇವರು ಕೆ.ಸಿ.ಎಸ್.ಆರ್ ನಿಯಮ 106 (ಎ) ಪ್ರಕಾರ ರಜೆ ಅರ್ಜಿ ಸಲ್ಲಿಸದೇ ಸಕ್ಷಮ ಪ್ರಾಧಿಕಾರದಿಂದ ರಜೆ ಮಂಜೂರಾತಿ ಪಡೆಯದೆ, ದಿನಾಂಕ: 19–05–2009ರಿಂದ ಕರ್ತವ್ಯಕ್ಕೆ ಹಾಜರಾಗದೇ ಅನಧೀಕೃತ ಗೈರು ಹಾಜರಾಗಿರುತ್ತಾರೆ. ಇವರು ಕರ್ತವ್ಯ ಸ್ಥಳದಲ್ಲಿ ವಾಸ್ತವ್ಯವಿಲ್ಲದೇ ಇದ್ದ ಕಾರಣ ಸೇವಾ ವಹಿಯಲ್ಲಿ ನಮೂದಿಸಿರುವ ವಾಸಸ್ಥಳದ ವಿಳಾಸಕ್ಕೆ ನೋಟಿಸು ಕಳುಹಿಸಿದಾಗ "Not Known" ಎಂಬ ಷರಾದೊಂದಿಗೆ ಹಿಂತಿರುಗಿ ಬರಲು ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು

ಪಂಚಾಯತ್ ಬೆಳ್ತಂಗಡಿ ಇವರು ತಮ್ಮ ಕಛೇರಿ ಸಿಬ್ಬಂದಿಗಳನ್ನು ಶ್ರೀ ದೀಪಕ್ ಮಾರುತಿ ನಾಯ್ಕ್ ಇವರ ಸೇವಾ ವಹಿಯಲ್ಲಿ ನಮೂದಿಸಿರುವ ಸ್ವಗ್ರಾಮ ವಿಳಾಸದ ಗ್ರಾಮಕ್ಕೆ ಕಳುಹಿಸಿ ಮಹಜರು ಮಾಡಿಸಲು, ಅಲ್ಲಿಯೂ ಸದ್ರಿ ನೌಕರರು ಸುಮಾರು 20 ವರ್ಷಗಳಿಂದ ವಾಸವಿಲ್ಲವೆಂದು ತಿಳಿದು ಬಂದಿರುತ್ತದೆ. ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್ ಬೆಳ್ತಂಗಡಿ ಇವರು ಅಂತಿಮವಾಗಿ ದಿನಾಂಕ: 13–12–2014ರಂದು ಪತ್ರಿಕಾ ಪ್ರಕಟಣೆ ಹೊರಡಿಸಿ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಿದ್ದರೂ ನೌಕರರು ಇದುವರೆಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಈ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ನೌಕರರ ದಿನಾಂಕ: 19–05–2009ರಿಂದ ಇದುವರೆಗೂ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರು ಹಾಜರಾಗಿರುವುದು ಶಿಸ್ತು ಪ್ರಾಧಿಕಾರಕ್ಕೆ ಮನದಟ್ಟು ಆದ ಹಿನ್ನೆಲೆಯಲ್ಲಿ ಸದರಿ ನೌಕರರನ್ನು ಉಲ್ಲೇಖ (4)ರ ಸುತ್ತೋಲೆಯಂತೆ ಸೇವೆಯಿಂದ ವಜಾಗೊಳಿಸುವುದು ಸೂಕ್ತವೆಂದು ನಿರ್ಧರಿಸಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂ:ದಕಜಿಪ/ಆಡಳಿತ/ಸಿಆರ್ 23/2007–08(ಎ6) ದಿನಾಂಕ: 19–01–2015.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ದೀಪಕ್ ಮಾರುತಿ ನಾಯ್ಕ, ಗ್ರೇಡ್–2 ಕಾರ್ಯದರ್ಶಿ, ಬೆಳಾಲು ಗ್ರಾಮ ಪಂಚಾಯತ್, ಬೆಳ್ತಂಗಡಿ ತಾಲ್ಲೂಕು ಇವರು ದಿನಾಂಕ: 19–05–2009 ರಿಂದ ಈ ದಿನದವರೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ನೇಮಕಾತಿ ಪ್ರಾಧಿಕಾರ ಹಾಗೂ ಶಿಸ್ತು ಪ್ರಾಧಿಕಾರ ಹಾಗೂ ಶಿಸ್ತು ಪ್ರಾಧಿಕಾರವಾದ ಶ್ರೀಮತಿ ತುಳಸಿ ಮದ್ದಿನೇನಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ದ.ಕ. ಜಿಲ್ಲಾಪಂಚಾಯತ್ ಮಂಗಳೂರು ಆದ ನಾನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (VIII) ರಂತೆ ಶ್ರೀ ದೀಪಕ್ ಮಾರುತಿ ನಾಯ್ಕ, ಗ್ರೇಡ್–2 ಕಾರ್ಯದರ್ಶಿ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದ್ದೇನೆ ಮತ್ತು ಸದರಿಯವರಿಂದ ವಸೂಲಾಗಬೇಕಾಗಿರುವ ರೂ. 38,936/– ಗಳನ್ನು ಸದರಿಯವರ ನಿವೃತ್ತಿ ವೇತನ ಅಥವಾ ಇತರೆ ಯಾವುದೇ ಪಾವತಿಯಿಂದ ವಸೂಲಾತಿ ಮಾಡಲು ಸಂಬಂಧಪಟ್ಟ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಸೂಚಿಸಿದೆ.

PR.-1041

**ನೇಮಕಾತಿ ಪ್ರಾಧಿಕಾರ ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ**
**ದ.ಕ.ಜಿಲ್ಲಾ ಪಂಚಾಯತ್ ಮಂಗಳೂರು.**

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಬೆಂಗಳೂರು

**ವಿಷಯ :** ಶ್ರೀಮತಿ ಎಂ.ಕಾಮಾಕ್ಷಿ,. ಸಹಾಯಕ ಸರ್ಕಾರಿ ಅಭಿಯೋಜಕರು ಅಧಿಕ ಸಿಜೆ ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಪಾಂಡವಪುರ ಇವರ ಜನ್ಮ ದಿನಾಂಕವನ್ನು ಅಂಗೀಕರಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಆದೇಶ ಸಂಖ್ಯೆ ಡಿಪಿಎನ್/ಸಿಶಾ–1(ಎ)/22/2010–11. ದಿನಾಂಕ: 30–10–2010.
2. ಶ್ರೀಮತಿ ಎಂ.ಕಾಮಾಕ್ಷಿ, ಇವರ ಮನವಿ ಸಂಖ್ಯೆ ಸಸಅ/ಪಾಂ.ಪುರ/48/2015–16, ದಿನಾಂಕ: 19–06–2015.
3. ಕಾನೂನು ಅಧಿಕಾರಿ (ಹಿರಿಯ) ಮೈಸೂರು, ಇವರ ಪತ್ರ ಸಂಖ್ಯೆ:ಕಾಅ(ಹಿ)/ಸಿಶಾ/1151/2015–16, ದಿನಾಂಕ: 29–06–2015.

**ಪ್ರಸ್ತಾವನೆ:–**

ಮೇಲೆ ಓದಲಾದ ಈ ಕಛೇರಿಯ ಆದೇಶದ ಕ್ರಮ ಸಂಖ್ಯೆ: 136 ರಲ್ಲಿ ಶ್ರೀಮತಿ ಎಂ. ಕಾಮಾಕ್ಷಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ತಿಪಟೂರು, ಇವರು ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಗೆ ನೇಮಕಾತಿ ಹೊಂದಿರುತ್ತಾರೆ. ಸದರಿಯವರು ದಿನಾಂಕ: 12–11–2010 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಉಲ್ಲೇಖ (2)ರ ಅಧಿಕಾರಿಯವರ ಮನವಿಯಲ್ಲಿ ಅವರು ತಮ್ಮ ಜನ್ಮ ದಿನಾಂಕವನ್ನು 12–11–1978 ಎಂದು ಅದಕ್ಕೆ ಪೂರಕವಾದ ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಮಂಡಳಿ, ಬೆಂಗಳೂರು, ಇವರು ನೀಡಿರುವ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಸಂಖ್ಯೆ: 105525 ಏಪ್ರಿಲ್ 1994 ರ ಪ್ರಮಾಣ ಪತ್ರವನ್ನು ಹಾಗೂ ನೋಟರಿ ಮುಂದೆ ಪ್ರಮಾಣೀಕರಿಸಿದ ಘೋಷಣಾ ಪ್ರಮಾಣ ಪತ್ರ ದಿನಾಂಕ: 23–06–2015 ಅನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಸದರಿ ದಾಖಲೆಗಳಲ್ಲಿ ಜನ್ಮ ದಿನಾಂಕ: 12–10–1978 ಎಂದು ದೃಢಪಡಿಸಿರುತ್ತಾರೆ. ಕರ್ನಾಟಕ ನಾಗರಿಕ ಸೇವಾ (ವಯೋ ನಿರ್ಧಾರ) ತಿದ್ದುಪಡಿ ಕಾಯ್ದೆ, 1974 ರ ಕಲಂ 3 ರ ಉಪಕಲಂ 2ರ ಅನ್ವಯ ಸದರಿಯವರ ಜನ್ಮ ದಿನಾಂಕವನ್ನು 12–10–1978 (ಹನ್ನೆರಡನೇ ಅಕ್ಟೋಬರ್ ಒಂದು ಸಾವಿರದ ಒಂಬೈನೂರ ಎಪ್ಪತ್ತೆಂಟು) ಎಂದು ಒಪ್ಪಲಾಗಿದೆ.

**ಕಛೇರಿ ಆದೇಶ ಸಂಖ್ಯೆ:ಡಿಪಿಎನ್/ಕೇಂಸ/ವಿವ/58/ 2015–16, ಬೆಂಗಳೂರು ದಿನಾಂಕ: 03ನೇ ಆಗಸ್ಟ್ 2015.**

ಶ್ರೀಮತಿ ಎಂ. ಕಾಮಾಕ್ಷಿ, ಸಿಜೆ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಪಾಂಡವಪುರ, ಇವರ ಜನ್ಮ ದಿನಾಂಕ: 12–10–1978 (ಹನ್ನೆರಡನೇ ಅಕ್ಟೋಬರ್ ಒಂದು ಸಾವಿರದ ಒಂಬೈನೂರ ಎಪ್ಪತ್ತೆಂಟು) ಎಂದು ಅವರು ಸಲ್ಲಿಸಿರುವ ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಮಂಡಳಿ, ಬೆಂಗಳೂರು ಇವರು ನೀಡಿರುವ ಎಸ್.ಎಸ್.ಎಲ್.ಸಿ ಅಂಕಪಟ್ಟಿ ಸಂಖ್ಯೆ: 105525 ಏಪ್ರಿಲ್ 1994 ಮತ್ತು ಘೋಷಣಾ ಪ್ರಮಾಣ ಪತ್ರವನ್ನು ಅಂಗೀಕರಿಸಿ ಅವರ ಜನ್ಮ ದಿನಾಂಕವನ್ನು 12–10–1978 (ಹನ್ನೆರಡನೇ ಅಕ್ಟೋಬರ್ ಒಂದು ಸಾವಿರದ ಒಂಬೈನೂರ ಎಪ್ಪತ್ತೆಂಟು) ಎಂದು ಒಪ್ಪಿ ಆದೇಶ ಹೊರಡಿಸಲಾಗಿದೆ.

PR.-1042

**ಕೆ.ರಾಮಣ್ಣ,**
**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು (ಪ್ರ) ಬೆಂಗಳೂರು.**

## MINISTRY OF SHIPPNG

### NEW MANGALORE PORT TRUST

### Panambur, Mangaluru

### Notification

### No.42/1/2015/TGA.4 Dated the November 18, 2015.

In exercise of the powers conferred by sub-section (II) of Section 124, of the Major Port Trust Act, 1963 the Board of Trustees of New Mangalore Port Trust hereby approves the New Mangalore Port Trust Regulations, 2015 as set-out in the schedule annexed to this Notification

**1. Short title and commencement.**

(1) These regulations may be called the New Mangalore Port Trust (Licensing of Steamer Agency) Regulation 2015.

(2) They shall come into force on the date of their publication in official Gazette.

1. **Definitions:- In these regulations, unless the context otherwise requires,**

(i) "Act" means the Major Port Trusts Act, 1963 (15 of 1908);

(ii) "Board" means the Board of Trustees of New Mangalore Port constituted under the Act;

(iii) "Chairman" means Chairman of the Port;

(iv) "Form" means form Annexed to these regulations,

(v) "Steamer Agent" is an authorized agent appointed by Charterer/ship owner.

(vi) "Traffic Manager" means the officer for the time being in charge of Traffic Department of New Mangalore Port Trust and includes the Deputies and Assistants to the Traffic Manager and any other Officers acting under the authority of the Traffic Manager.

**(3) Scope/Period of Issue/Renewal of Steamer Agency License:**

**The Steamer Agency shall cover the following activities:**

The Steamer Agency work assigned by the Charter/line Operator /ship owner container vessel operator while the ship is in the Port. No Steamer agent shall be allowed to attend to work on any vessel in the Port except under a license issued by the Chairman under these regulations after expiry of six months from the date of notification. Chairman may issue Steamer agency licence for a period of two years, on application, to persons to act as Steamer Agent on behalf of their principal at the Port to perform all the vessel related work in the Port and any other work involved in the Steamer agency of the vessels within the Port.

The Charter agent or their authorized representative may attend the vessel related activities through Port Community System including advance vessel intimation to the Port authority, Vessel Registration, berthing/sailing/shifting program of the vessel, settlement of vessel related Port Charges, ensure the productivity parameters, engaging surveyor, submit relevant documents to the Port authority, furnish updated information on vessel performance to the Port Authority.

The vessel owner agent will attend the job of providing ancillary service to the vessel calling at the Port which includes arranging customs examination of the vessel, Port health service, crews services fresh water supply, provisions supply, fire service if required, Security service to the ship as per the ISPS code, engaging surveyor, submission of document/information to the Port authority.

**The license shall be valid for a period of 2 years from the date of issuance of license.**

The license will be strictly renewed on the basis of achieving minimum 4 vessels per annum, and as fixed from time to time. There will not be any automatic renewal of the licence. Licence may be renewed on written application made two months prior to expiry of the licence.

**4. The licence is not transferable:**

**5. Steamer Agency Charges:**

The Steamer Agent may collect their service charge from the vessel Owner/Charterer..

**License for Steamer agency.**

Steamer Agent licenses shall be issued by the Port, in case the firm fulfils the following criteria:

(i) It shall be a Company or Firm Registered under the Companies Act 1952 or an establishment registered under any of other legal entity.

(ii) Appointment letter from ship Owner/Charter agent to act as Steamer Agent at New Mangalore Port.

(iii) Licence Fee Rs.5,000/- or as per TAMP Notified rate.

(iv) Copy of Income Tax Returns/PAN

(v) Proof of Financial Stability/Bank Solvency

(vi) Introduction letter from the Company/Firm explaining their detail programes proposed to entertain in the New Mangalore Port.

(vii) The Steamer Agent licence is subject to renewal every 2 years depending on the performance of the agent as Notified by the TAMP.

(viii) Steamer Agent Licence renewal fees is Rs.1,000/- as Notified by the TAMP.

(ix) Permission letter from the Commission of Customs or his subordinate Officer to operate as Steamer Agent as per Customs Regulation in force.

**6. Issue of new steamer agency licence:**

New Steamer agency licence is issued in accordance with the Regulation by the Chairman.

**7. Duties and responsibilities of Steamer Agent:**

I. **Vessel Owner Agent:**

He is to act as owners extended right arm

a) He is to look after domestic requirements of the ship.
b) Owners interested are protected.
c) He will be responsible for crewing, stores, technical, insurance and operational aspect of the Ship.
d) Confirm with Port authority the facilities, Port charges, Stevedores, Marine services, Customs, immigration, ship performance monitoring, medical.
e) Implement ISPS code for ships, Safety and pollution, protect environment around coast.
f) Comply to the provisions of Indian Port Health Rules 1955 before arrival of the vessels, P&I Club.
g) Liaison with shippers, consignees', provide all necessary information to the Port authority and other statutory authorities as and when demanded., He will be responsible for any loss or damage that may arise in consequence of their faulty navigation for by reason of their breaking adrift from their anchors or mooring.
h) He will be held liable and responsible for the acts of the crew and any person employed by them either outside or on board, their vessel. The cost, risk and responsibilities of the vessel will be under the owner agent account.
i) Issue of notice of redness to shippers.
j) Issue of delivery order to the consignees/ or endorse the original bills of lading.
k) Arrange stowage and stowage plan, preparation of mate receipt etc.
l) Declare all the hazardous cargo / ammunition on Board prior to entry of vessel.
m) Indemnify NMPT for all the damage caused to vessel under its Agency and clear or Co- ordinate to clear the liabilities / dues to the NMPT.

**II. Charter Agents:**

The functions of the Charterer is cargo based. He has to deal with Port Authority, Customs, Stevedores and Transporters. He is responsible for the shift wise operation , safety and pollution and protect environment around the coast and be responsible for any damage caused to Port property in Port / stay at Port or Port limit.

**8. Change in name/constitution etc. to be communicated:**

(1) Where the steamer is a firm or a Company, it shall immediately communicate to the Chairman any change in the Director, Managing Director or partners, as the case may be, with a copy of the document in support of the such change.

(2) Any change in the name, title or constitution of a firm or a company holding a steamer Agent licence shall be communicated to the Chairman forthwith. The firm or Company undergoing such a change shall submit a fresh application for the grant of new license: provided that the Chairman may allow such firm or Company to carry on business till a decision is taken on such fresh application.

**9. Power of Chairman to suspend a licence pending enquiry:**

The Traffic Manager shall report any violation of terms and conditions of the steamer agency licence by the steamer agent to the Chairman and Chairman may, pending enquiry, within a period of 60 days from the date of the order of the enquiry suspend the licence issued to a steamer agent for a period not exceed 3 months if he found to do so in the interest of the Port.

**10. Cancellation/Suspension of Licence:**

(a) The Port may at any time suspend or cancel the licence issue to a Steamer agent for violation of any of the terms of licence or any reasons listed below when;

(b) The CEO of the steamer has been convicted by the Court of any offence involving moral turpitude and sentenced in respect thereof to imprisonment for not less than six months, an a period of five years has not elapsed from the date of expiry of the sentence.

(c) The firm handles less than the minimum guaranteed throughout/the prescribed parameters as fixed by the Port.

(d) Violates safety regulations and mandatory Dock Safety measures.

(e) Adopts improper and unsafe handling methods.

(f) Misrepresents or misstates of material facts.

(g) Adjudged insolvent or going into liquidation.

(h) Causing obstruction to any work in the Port.

(i) Transfers the stevedoring operations or subjects the license to any other individual or parties.

(j) Violates security related rules & instructions like ISPS code compliance etc.

(k) Any misconduct which in the opinion of the Port

(l) warrant such cancellation or suspension.

(m) Indulges in illegal/corrupt practices.

(n) Violation of safety precautions.

(o) Low productivity

(p) Lack of supervision over Steamer workers.

(q) Improper and unsafe handling of packages.

(r) Any breach in operation of the Steamer at the Port.

(s) Non compliance of any statutory provisions applicable to Steamer operation at the Port.

Provided that no such licence shall be cancelled or suspended as the case may be until the holder of the license has been given a reasonable opportunity for showing cause why his license should not be cancelled or suspended as the case may be.

**11. Appeal:**

(1) Any person aggrieved by orders of the Chairman granting or refusing to grant a license or renewing or refusing to renew a license or suspending a license under these regulation may prefer an appeal in writing to the Central Government within 30 days of the communication of the orders appealed against.

(2) The Central Government shall pass such orders on the appeal as it deems fit after giving an opportunity of being heard to the appellant.

(3) Notwithstanding anything contained in this regulation, an appeal may be admitted after the period of thirty days if the appellant satisfies the Central Government that he had sufficient cause for not making an application within such period.

**P.D. 3** **Traffic Manager**

**SC-5** New Mangaluru Port Trust

## UNIVERSITY OF AGRICULTURAL SCIENCES, BENGALURU

### Administrative Office, GKVK, Bengaluru-560065.

### NOTIFICATION

### No. AO/RT/ CAS-2006/Prof.(HAG)/2015-16, Date: 15-12-2015

**Sub :** Guidelines and Score-card for Promotion of Professor as Professor (HAG) under CAS-2006.

**Ref :**

1. UGC No. F.3-1/2009 dated:30 June, 2010, endorsed by ICAR vide F.No.l(01) /2009-Per-IV dated: 2nd August, 2010.
2. GO No. AHD 64 AUM 2009 dated:24-3-2010.
3. No.AO/RT/Guidelines & Score-card/CAS-2006/2013-14 published KarnatakaGazette dated: 23-5-2013.
4. Minutes of the 366th Meeting of the Board of Management, UAS-B held on 8-10-2015. Part-B, Item-16.
5. Approval of the Vice-Chancellor UAS, Bengaluru dated: 12-12-2015.

Career Advancement Scheme-2006 is implemented for Teachers in the University of Agricultural Sciences, Bengaluru w.e.f. I-7-2010 vide Notification No.AO/RT/Guidelines and Score-card/CAS-2006/2013-14 published Karnataka Gazette dated: 23-5-2013.

As per para 1.2.1 of the Notification, Ten percent of the positions of sanctioned posts of Professors in the University may be upgraded to the new HAG scale of Rs.67,000- 79,000/- (annual increment @ 3%) with no grade pay and persons with a minimum of ten years of teaching/research/ extension experience as Professor either in the pre-revised scale of Professor's pay or the revised scale pay will be eligible for promotion to the higher grade of Professorship on satisfying the required minimum scores, assessed by a duly constituted Expert committee, and such teachers promoted to the higher grade shall continue to be designated as Professor (HAG).

The Officers Committee constituted by the University recommended the following Guidelines by formulating score-card for promotion of Professor as Professor (HAG).

1. Ten percent of the sanctioned posts of Professors may be upgraded to the position of Professors (HAG) with higher pay scale of Rs.67,000-79,000 (Annual increment@ 3%) with no grade pay}.
2. All the teachers / scientists/officers in the Cadre of Professor (either directly recruited or promoted as Professor under CAS /TBP) with a minimum of ten years of experience as Professor on the date of Notification calling for applications are made eligible to apply for the position as Professor (HAG).
3. The assessment process shall be through an Expert-Committee to be constituted by the University. Applicants will not be interviewed and the assessment will be based only on the credentials of the applicants supported by documents.

   The Expert Committee shall comprise of four persons of eminence not below the rank of Vice-Chancellors/Deans/ Directors in service or retired under the Chairmanship of Vice-Chancellor, UAS, Bengaluru.
4. All the Experts of the Committee (minimum three members/quorum) shall explicitly / independently mention in their recommendations whether the candidate is eligible or not for placing in the New HAG scale and the committee is empowered to evaluate the Bio-data and indicate the score for eligibility for promotion.
5. The names of all the recommended candidates will be pooled at the University Level and based on seniority and the availability of the number of posts, University shall place the candidates in the New HAG scale. The recommended list shall be kept in reserve for a period of three years and shall be placed in the new HAG scale as and when vacancies arise.
6. If not qualified for HAG position, the teacher has to apply again after three years
7. The implementation of HAG will come in to effect from 1-7-2010. The incumbent teacher must be on roll and active service of the University on the date of consideration by the committee. However, if the assessment of the teacher is delayed he / she may be considered for promotion even after retirement (One time provision for retired teachers w.e.f 1-7-2010 upto date of Notification).
8. Qualification / Credentials and other information as indicated in the score card may be submitted for evaluation and this has to be certified by the Concerned Officers.
9. The Committee has suggested the Score-card for Professors seeking HAG Scale.

The Board in its 366th held on 8-10-2015 approved the above Guidelines and Scorecard (Annexure- to this Notification) for promotion of Professor to Professor (HAG) w.e.f.1-7-2010.

By Order

**Administrative Officer,**

University of Agricultural Sciences GKVK, Bengaluru.

**Annexure to Notification No.AO/RT/CAS-2006/Prof.(HAG)/2015-16 Date:15-12-2015**

Score-card for Professors of UAS, Bengaluru, seeking HAG Scale

| **Sl. No.** | **Particulars** | **Marks allotted for main items** |
|---|---|---|
| 1. | Academic Qualifications. | 02 |
| 2. | Experience in the cadre of Professor and above. | 10 |
| 3. | Scientific publications in the cadre of Professor. | 15 |
| 4. | Attainment in the professional field in the cadre of Professor. | 15 |
| 5. | Externally funded Projects operated as Professor | 15 |
| 6. | International Exposure (in the cadre of Professor & above). | 05 |
| 7. | Institutional Building (in the cadre of Professor and above). | 15 |
| 8. | Organizing Symposium Seminar/Summer Institute/ Winter Institutes/ Refresher Courses/ Workshops and Training Programme in the cadre of Professor and above. | 05 |
| 9. | Awards/Medals/Fellowships/recognition for academic excellence in Teaching/ Research/ Extension in the cadre of Professor and above. | 05 |

| Sl. No. | Particulars | Marks allotted for main items |
|---|---|---|
| 10. | Out station experience in the cadre of Professor and above. | 08 |
| 11. | Confidential reports for the preceding 5 years in the cadre of Professor and above. | 05 |
| | **Total Marks:** | **100** |

**EXPLANATORY NOTES FOR AWARD OF MARKS :**

| | | |
|---|---|---|
| **1.** | **Academic Qualifications** | **Maximum marks allotted = 02** |
| | **Higher Qualification in the academic field in the cadre of Professor and above.** | a. Post-doctoral fellow (6 Months and above)<br>b. Visiting Professor / Visiting Scientist or Fellow (3 months and above) |
| **2.** | **Experience in the cadre of Professor and above.**<br>**(Marks will be awarded after 10 years of experience)** | **Maximum marks allotted = 10**<br>(1 mark for each year over and above 10 years) |
| **3.** | **Scientific publications in the cadre of Professor and above to the last date of submission of application.** | **Maximum marks allotted = 15**<br>a. For full length papers published in refereed scientific Journals:<br>1. International level = **1.5 marks each**<br>2. National level = **1 mark each**<br>3. Research note published in refereed journals = **0.5 mark each**<br>b. Full length papers presented & published in Seminar/ Symposia/Conferences proceedings: (Maximum = 7 marks)<br>1. International level = 1 mark each<br>2. National level = 0.5 mark each.<br>c. For Research Note / Abstracts / short communication / Poster presentation published in Seminar / Symposium / Conferences= **0.50 and 0.25 mark each** for National/International respectively each (Maximum = 6 marks)<br>d. Books published by individuals= 2 marks each **(Maximum=4 marks).**<br>**Note:** Translation books carry 50% marks.<br>e. Research Bulletins / Extension Bulletins / Chapters in Books published by Universities /NationalInstitutes /Government Departments / Standard Commercial Publishers / Training Manuals / Teaching Manuals<br>**= 0.25 mark each (Maximum = 3 marks)**<br>f. Extension Leaflets / Folders / Brochures/published by Universities/ National Institutes /Government Departments / Standard Commercial publishers<br>**= 0.25 mark each (Maximum = 3 marks).**<br>g. Popular articles published in leading Dailies/ Institutional /Govt. Departmental Periodicals/ Radio talks/ TV programmes/ Phone- in programmes = 0.25 mark each (Maximum = 3 marks) |

| | | |
|---|---|---|
| | | Note:<br>1) All the publications mentioned above should have been published as on the last date prescribed for submission of filled-in application<br>2) The first three authors in all the above cases will get full marks while the rest of the authors will get 50 per cent of the marks allotted to each item. |
| **4.** | **Special Attainment in the cadre of Professor and above to the last date of submission of application.** | **Maximum marks allotted = 15**<br>a. Special attainment achieved in Teaching / Research / Extension In addition to his / her regular Teaching / Research / Extension activities. = 0.5 mark per activity.<br>b. For every PG student guided.<br>1. Ph.D. Student **= 0.75 mark**<br>2. M.Sc. Student **= 0.50 mark**<br>As a Member/Guide **= 0.25 mark**<br>c. Release of Variety / Technology/ Prototypes developed **= 02 marks each.** For PI/Leader and for Co-PI / Collaborator/ Associates **= 1 mark each**<br>d. Registration for Patents made**=3 marks each -.**<br>e. Service rendered by carrying out full time activities to support the University's academic/General administration = **1 mark** per year..<br>f. Serving/served as Chairman/Member in National/State level Scientific Committees, Executive Committee Member of National bodies, Member of INSA, NAAS, Accreditation Committee, Peer Review Committee and similar committees, Fellow of Academic Bodies, Chairman of International Conferences Session, Member of Academic Council of UAS, B and nominated Member of the Academic Council/Board of Studies of other Universities, Member of Governing Body/Editorial Board of National/International Journals, Task Force Member, Guiding a student who secures Jawaharlal Nehru Award. - **Maximum Marks = 03 (0.5 marks for each activity).** |
| 5. | **A. Externally funded Projects operated in the cadre of Professor and above.** | **Maximum marks allotted = 15**<br>a. Project outlay of Rs.1 Lakh to 5 Lakhs = **1 mark** per Project as Principal Investigator (PI) and **0.5 mark** per Project as Co-Principal Investigator (Co- PI).<br>b. Project outlay of Rs. 5 Lakh to 10 Lakhs **= 2 marks** per Project as Principal Investigator (PI) and **1 mark** per Project as Co-Principal Investigator (Co- PI).<br>c. Projects outlay of above Rs. 10 Lakhs upto 20 Lakhs **= 3 marks** per Project as PI and **1.5 marks** per Project as Co PI.<br>d. Projects outlay of Rs.21 Lakhs upto 50 Lakhs **= 4 marks** per Project as PI and **2 marks** per Project as Co- PI.<br>e. Project outlay of above 51 Lakhs = 5 marks per project as PI and **2.5 marks** per project as Co-PI. |

| | | |
|---|---|---|
| | **B. Projects/funds allotted to teachers by the UAS/ Government of Karnataka in the cadre of Professor and above.** | a. Project outlay of RS.1 Lakh to 10 Lakhs **= 1 mark** per Project as Principal Investigator (PI) and **0.5 mark** per Project as Co-Principal Investigator (Co- PI).<br>b. Projects outlay of above Rs.11 Lakhs upto 20 Lakhs **= 1.5 marks** per Project as PI and **0.75 mark** per Project as Co PI.<br>c. Projects outlay of Rs.21 Lakhs upto 50 Lakhs **= 2 marks** per Project as PI and **1 mark** per Project as Co- PI.<br>Project outlay of above 50 Lakhs **= 2.5 marks per project as PI and 1.25 marks per project as Co-PI.** |
| **6.** | **International Exposure (in the cadre of Professor & above)** | **Maximum marks allotted = 05**<br>a) Experience of working with international organization/ laboratory-**1 mark for each visit.**<br>b) Expert/Advisor on invitation/ Government deputation, Presentation of Research papers at the International conferences. (Presented outside the Country) **= 1 mark for each activity.** |
| **7.** | **Institutional Building (in the cadre of Professor & above).** | **Maximum marks allotted=15**<br>Only clearly defined contributions **as a leader** in institutional building shall be considered.<br>a) Creation of a totally new infra-structure, laboratory, new equipment's farm or field facility etc., that has bearing on improved standards of research, education, and extension.<br>b) Structural changes in operational research and management reforms which resulted in better production or efficient utilization of resources.<br>c) Any administrative reforms/restructuring that brought in more transparency, integrity and social justice.<br>- **2 marks for each of the above stated contributions.**<br>- **1 mark as Co-leader**<br>d) As Officer -1 mark per year.<br>e) As University Head/HOD/Scheme Head /**other corporate works = 0.5 mark** per year. |
| **8.** | **Organizing Symposium Seminar/ Summer Institute! Winter Institutes/Refresher Courses/ Workshops and Training Programme in the cadre of Professor and above.** | **Maximum marks allotted = 05**<br>For conducting / Organizing Symposia/Seminars /Summer Institute / Winter Institute/Refresher Course / Workshop / Training Programme at:<br>a. International = 3 marks per activity as Leader/Director; **2 marks** per activity as Associate Leader/Co-Director; As Committee Member **0.5 mark.**<br>b. National level **= 2 marks** per activity as Leader/Director; **1 mark** per activity as Associate Leader / CO-Director; As Committee Member **0.5 mark**.<br>c. University level **= 1 mark** per activity as Leader/Director; **0.50 mark** per activity as Associate Leader/Co - Director; As Committee Member **0.5 mark.** |

| | | |
|---|---|---|
| | | d. For Participating in Symposia/ Seminars/ Summer Institute/Winter Institute/Refresher Course/Workshop/Training Programme as Resource Person to impart training **0.25 mark** per activity. |
| **9.** | **Awards/Medalsf/Fellowships/ recognition for academic excellence in Teaching/ Research/ Extension in the cadre of Professor and above.** | **Maximum marks allotted = 05**<br>**a.** For any national/International award (recognized) such as by UGC, ICAR, CSIR, DBT, DST, State Government, Central Government, FAO of the UN etc., relevant to the subject/discipline of specialization In case of joint recognition / award, the leader/ PI will get **4 marks** and associates will get **2 marks.**<br>b. **1 mark** each for Recognition Award or other awards of National Academies recognized by UGC, ICAR, CSIR.<br>c. For awards from the State Government Departments, National Institutes, Universities, Professional Societies (registered), President/ Chairman/ Member/ Member Secretary of important Committees and other decision/policy making bodies/ committees of national level (excluding official duty/ assignment at institutional level); member of Editorial Board of National and international NAAS-rated Journals, Reviewer of peer-reviewed Journals, Reviewer for peer reviewed NAAS listed journals: and Conference prize/medal such as best paper or best poster. (**0.5 marks** for each event).<br>d. University level Awards = 1 mark for each year. |
| **10.** | **Outstation experience during the preceding 5 years to the last date of submission of application in the cadre of Professor and above.** | **Maximum marks allotted = 8**<br>a. A/B class city = Nil.<br>b. **C class city = 1.0 marks** for each year of service in the cadre of Professor.<br>c. **Other than 'C' City =1.5 marks** for each year of service in the cadre of Professor. |
| **11.** | **Confidential reports for the preceding 5 years in the cadre**<br>**as Professor and above.** | **Maximum marks allotted = 05**<br>Grading given by the Reporting Officer:<br>1. A/A +/ A" **= 1 mark** per year.<br>2. B/B+/B" **= 0.75 mark** per year.<br>3. C/C+/C- **= 0.5 mark** per year. |

**Note: Professors who are working as Coordinators at PPMC, Communication center, Controller of examination cell, Kannada department, Technical officers under various directorates and other such similar units will be evaluated for 60.00 marks based on the work done report submitted by the professor and recommended by the concerned officers in addition to the general score card developed for other professors.**

**MINIMUM SCORE FOR ELIGIBILITY = 70.00/100.**

By Order

**Administrative Officer**

University of Agricultural Sciences GKVK, Bengaluru.

## UNIVERSITY OF AGRICULTURAL SCIENCES, BENGALURU

**Administrative Office, GKVK, Bengaluru-560065.**

**NOTIFICATION**

**No. AO/RT/ Guidelines & Score-card/CAS-2006/2015-16, Date: 16-12-2015**

**Sub:** Addition to the Guidelines of Career Advancement Scheme(CAS)-2006 relating to publications of Teaching Staff of Department of Kannada Studies in the University of Agricultural Sciences, Bengaluru for Promotion to Associate Professor and Professor cadre.

**Ref:**
1. Notification No.AO/RT/Guidelines & score-card/ CAS 2006/2013-14, dated:25-4-2013.
2. Letter No.11/2015-16/ ATUAS (B) dated:29-5-2015.
3. Approval of the Vice-Chancellor, UAS, Bengaluru, dated: 15-12-2015.

The Following Addition is included as clause 6 to the existing CAS-2006 Guidelines of the Notification No.AO/RT/Guidelines & Score-card/ CAS-2006/ 2013-14 dated:25-4-2013 published in the Karnataka Gazette on 23-5-2013. This addition is effective from 1-7-2010.

**Clause 6:**

In case of promotion of teachers under CAS-2006 in the Department of Kannada Studies, UAS, Bengaluru, instead of Refereed Journals, Books written individually/Publications in Government Academy Journals are considered equal to Refereed Journals viz., a minimum of three very important publications/Books written individually after being placed in the AGP of Rs.6000 to AGP of Rs.8000 for promotion to Associate Professor cadre and a minimum of three very important publications/ Books written individually after being placed in the AGP of Rs.8000 to AGP of Rs.9000 for promotion to the cadre of Professor.

**P.D. 1**
**SC-50**

By Order

**Administrative Officer,**

University of Agricultural Sciences GKVK, Bengaluru.

## MINISTRY OF SHIPPNG

**NEW MANGALURU PORT TRUST**

**Panambur, Mangaluru**

**Notification**

**No. 16/6/2015/TGAI(ATI) dated : the November 16, 2015.**

In exercise of the powers conferred by sub-section (1) of section 124, red with sub-section (1) of Section 132 of the Major Port Trust Act, 1963 (38 of 1963), the Board of Trustees of New Mangaluru Port Trust hereby approves the New Mangaluru Port Trust Employees (Recruitment, Seniority and Promotion) Amendment Regulations, 2015 as set-out in the Schedule annexed to this notification.

The said Regulations shall come into force from the date of publication of this Notification in the Official Gazette.

**SCHEDULE**

**NEW MANGALURU PORT TRUST**

New Mangalore Port Trust Employees (Recruitment, Seniority & Promotion) Amendment Regulations, 2015.

In exercise of the powers conferred by Section 28 of the Major Port Trust Act, 1963(38 of 1963), the Board of Trustees of the New Mangalore Port Trust hereby makes the following regulations further to amend the New Mangalore Port Trust Employees (Recruitment, Seniority, Promotion) Regulations, 1980 and amended from time to time.

- These Regulations may be called the New Mangalore Port Trust Employees (Recruitment, Seniority and Promotion) Amendment Regulations, 2015.

**Traffic Manager**

New Mangaluru Port Trust

**NEW MANGALURU PORT TRUST**

**TRAFFIC DEPARTMENT**

**RECRUITMENT RULES FOR THE POST OF ASST. TRAFFIC INSPECTOR**

**No. 16/6/2015/TGA 1(AT1) Dated : the November 16, 2015.**

| Sl. No. | Name of the Post | No of Posts | Classification | Scale of Pay Rs. | Whether Selection or Non-Selection | Upper Age limit for direct recruitment (In yrs.) | Educational and other qualifications prescribed for direct recruitment | Whether a) Age b)Ecucational Qualifications c) Experience Prescribed for direct recruits will apply in case of promotion/ absorption | Period of Probation (in years) | Method of recruitment (whether by direct recruitment or by promotion/ absorption/ deputation) | In case of promotion/ absorption/ deputation grades from which it should be made | Remarks |
|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 35 | Assistant Traffic Inspector | 49 | Class-III | Rs. 19100-51100 | Selection | 35 years | 1) Minimum any graduation from recognized University<br>2) Computer knowledge is desirable<br>3) Knowledge of Kannada is essential | a) Age : No<br>b) Qualification : Yes<br>c) N.A. | 1 Year | By transfer failing which by promotion and failing both, by direct recruitment | Transfer from Sr. Asst. in the scale of pay of Rs. 19,100-51.100 in the Port on willingness basis failing which, by promotion from Jr. Asst. with 4 years regular service in the grade in the scale of pay of Rs. 17,700-44,600 in the Port on willingness basis. | Feeder post for transfer : Sr.Asst.<br>For Promotion: Jr. Asst. in the Port. |

**P.D. 2**

**SC-5**

**Traffic Manager**

New Mangaluru Port Trust

## ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು

**ವಿಷಯ :–** ಶ್ರೀ ಜಯತೀರ್ಥ.ಗು.ಕುಲಕರ್ಣಿ, ದ್ವಿತೀಯ ದರ್ಜೆ ಸಹಾಯಕ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಳಗಾವಿ ಇವರ ವಿರುದ್ಧ ಅನಧಿಕೃತ ಗೈರು ಹಾಜರು ಹಾಗೂ ಕಛೇರಿ ದಾಖಲಾತಿಗಳ ತಿದ್ದುಪಡಿ ಮಾಡಿ ದುರ್ನಡತೆ ಬಗ್ಗೆ ಶಿಸ್ತುಕ್ರಮ ಕುರಿತು.

**ಓದಲಾಗಿದೆ :**

1. ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಬೆಳಗಾವಿ ಇವರ ಪತ್ರ ಸಂಖ್ಯೆ: ಜಅಇ/ಸಿಬ್ಬಂದಿ/ಸತೋನಿ/ಜಕ/12–13 ದಿನಾಂಕ : 2/22–11–2012
2. ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಪತ್ರ ಸಂ:ಜಅಇ/ಆಡಳಿತ–4/ವಿನಿ–1/ವಿವ–174/12–13 ದಿನಾಂಕ : 10–9–2013
3. ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಪತ್ರ ಸಂ:ಜಅಇ/ಆಡಳಿತ–4/ವಿನಿ–1/ವಿವ–174/12–13 ದಿನಾಂಕ : 20–2–2014.
4. ಇಲಾಖಾ ಪತ್ರ ಸಂ:ಸಿಬ್ಬಂದಿ–1/ವಿಚಾರಣೆ–5/17/13–14 ದಿನಾಂಕ : 18–3–2014
5. ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಆದೇಶ ಸಂ:ಜಅಇ/ಆಡಳಿತ–4/ವಿನಿ–1/ವಿವ–174/12–13 ದಿನಾಂಕ : 21–4–2014.
6. ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಜ.ಅ.ಇ. ಬೆಳಗಾವಿ ಇವರ ಪತ್ರ ಸಂ:ಹಿಸತೋನಿ/ಜಅಇ/13–14/58 ದಿನಾಂಕ : 13–5–2014.
7. ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಜ.ಅ.ಇ. ಬೆಳಗಾವಿ ಇವರ ಪತ್ರ ಸಂ:ಹಿಸತೋನಿ/ಜಅಇ/ಬೆ/13–14/62 ದಿನಾಂಕ : 19–5–2014.
8. ವಿಚಾರಣಾಧಿಕಾರಿಗಳಾದ ಶ್ರೀ ಫ.ನಿ.ಗುಡ್ಡಾಕಾರ, ನಿವೃತ್ತ ಜಿಲ್ಲಾ ನ್ಯಾಯಾದೀಶರು ಇವರ ವಿಚಾರಣಾ ವರದಿ ದಿನಾಂಕ : 25–6–2014.
9. ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಪತ್ರ ಸಂ:ಜಅಇ/ಆಡಳಿತ–4/ವಿನಿ–1/ವಿವ–174/12–13 ದಿನಾಂಕ : 17–7–2014.
10. ಇಲಾಖಾ ಎರಡನೇ ಕಾರಣ ಕೇಳುವ ಸೂಚನಾ ಪತ್ರ ಸಂ:ಸಿಬ್ಬಂದಿ–1/ವಿಚಾರಣೆ–5/17/13–14, ದಿನಾಂಕ : 5–11–2014
11. ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಜ.ಅ.ಇ. ಬೆಳಗಾವಿ ಇವರ ಪತ್ರ ಸಂ:ಹಿಸತೋನಿ/ಜಂಕೃಷಿಇಲಾಖೆ/ಬೆ/02 ದಿನಾಂಕ : 25–11–2014.
12. ಇಲಾಖಾ ಪತ್ರ ಸಂ:ಸಿಬ್ಬಂದಿ–1/ವಿಚಾರಣೆ–5/17/13–14 ದಿನಾಂಕ : 30–3–2015, ದಿನಾಂಕ : 8–5–2015
13. ಜಂಟಿ ಕೃಷಿ ನಿರ್ದೇಶಕರು, ಬೆಳಗಾವಿ ಇವರ ಪತ್ರ ಸಂ:ಜಂಕೃನಿ/ಬೆ/ಸಿಬ್ಬಂದಿ–3/ ಜಗುಕು/ದ್ವಿದಸ/ಸೇವಿ/2014–15/406–07 ದಿನಾಂಕ : 8–6–2015.

**ಪ್ರಸ್ತಾವನೆ :**

ಶ್ರೀ ಜಯತೀರ್ಥ.ಗು.ಕುಲಕರ್ಣಿ, ಇವರು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ,ಬೆಳಗಾವಿ ಕಛೇರಿಯಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಜನವರಿ 2012 ರ ಮಾಹೆಯ ದಿನಾಂಕ 5,6 ಮತ್ತು 7 ಹಾಗೂ 25–8–2012 ರಿಂದ ಈವರೆಗೆ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಅಲ್ಲದೆ ಅಲ್ಮೇರ ಕೀಲಿಯನ್ನು ಯಾರಿಗೂ ವಹಿಸಿಕೊಡದೇ ಇದ್ದುದರಿಂದ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಬೆಳಗಾವಿ ಇವರ ಅನುಮತಿಯ ಮೇರೆಗೆ ಅಲ್ಮೇರಾ ಬೀಗ ತೆಗೆಸಿ ಪರಿಶೀಲಿಸಿದಾಗ ಕಛೇರಿಯ ಆರ್ಥಿಕ ವಹಿವಾಟಿಗೆ ಸಂಬಂಧಿಸಿದ ಯೂನಿಯನ್ ಬ್ಯಾಂಕ್ ಆಫ್ ಇಂಡಿಯಾ, ಬೆಳಗಾವಿಯ ಶಾಖೆಗೆ ಸಂಬಂಧಿಸಿದ ಚೆಕ್ಕುಗಳ ಹಾಳೆಗಳ ಮೇಲೆ ಅವರ ಹೆಸರಿಗೆ ಸಂದಾಯವಾಗುವಂತೆ ಶ್ರೀ ಜಯತೀರ್ಥ.ಗು.ಕುಲಕರ್ಣಿ, ದ್ವಿತೀಯ ದರ್ಜೆ ಸಹಾಯಕ, ಪ್ರಭಾರ ಸಹಾಯಕ ತೋಟಗಾರಿಕೆ ನಿರ್ದೇಶಕರು, ಬೆಳಗಾವಿ ಎಂಬ ಮಾದರಿ ಸಹಿಯೊಂದಿಗೆ ಸಹಾಯಕ ತೋಟಗಾರಿಕೆ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಳಗಾವಿ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಬೆಳಗಾವಿ ಇವರು ದೃಡೀಕರಿಸಿದ ಪತ್ರ ಮತ್ತು ವ್ಯವಸ್ಥಾಪಕರು, ಯೂನಿಯನ್ ಬ್ಯಾಂಕ್, ಬೆಳಗಾವಿ ಇವರಿಗೆ W.G.D.P (ಪಶ್ಚಿಮಘಟ್ಟ ಅಭಿವೃದ್ಧಿ ಯೋಜನೆ) ಯೋಜನೆಯಡಿಯಲ್ಲಿ ಹಣ ಸಂದಾಯ ಮಾಡುವ ಬಗ್ಗೆ ದಿನಾಂಕ 28–6–2012 ರಂದು ತಯಾರಿಸಿರುವ ಪತ್ರ ಅಲ್ಮೇರಾ ಪರಿಶೀಲನೆ ಸಮಯದಲ್ಲಿ ಲಭ್ಯವಾಗಿರುತ್ತದೆ.

ಈ ಎಲ್ಲ ದಾಖಲಾತಿಗಳಲ್ಲಿ ಸಹಾಯಕ ತೋಟಗಾರಿಕೆ ನಿರ್ದೇಶಕರು, (ಜಅಇ), ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಬೆಳಗಾವಿ ಹುದ್ದೆಗಳ ರಬ್ಬರ್ ಮೊಹರ್‌ಗಳನ್ನು ಬಳಸಿಕೊಳ್ಳಲಾಗಿದೆ. ಈ ದುರ್ನಡತೆ ಬಗ್ಗೆ ಸಹಾಯಕ ತೋಟಗಾರಿಕೆ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಳಗಾವಿ ಇವರಿಂದ ದಿನಾಂಕ 12–1–2012, 15/18–9–2012,20–9–2012,9–10–2012 ಮತ್ತು 19–10–2012 ರಂದು ಸಾಕಷ್ಟು ಜ್ಞಾಪನಾ ಪತ್ರಗಳು ಹಾಗೂ ಕಾರಣ ಕೇಳಿ ನೋಟಿಸ್‌ನ್ನು ಸ್ವಂತ ವಿಳಾಸಕ್ಕೆ ಜಾರಿ ಮಾಡಿದ್ದರೂ ಸಹ ಯಾವುದೇ ವಿವರಣೆ ನೀಡದೆ ಇದ್ದುದರಿಂದ ಜಿಲ್ಲಾ ಜಲಾನಯನ

